**ಕರ್ನಾಟಕ ವಿಧಾನ ಪರಿಷತ್ತು**

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 1105 |
| **ಸದಸ್ಯರ ಹೆಸರು** | ಶ್ರೀಮತಿ ಎಸ್. ವೀಣಾ ಅಚ್ಚಯ್ಯ<br>(ವಿಧಾನಸಭೆಯಿಂದ ಚುನಾಯಿತರಾದವರು) |
| **ಉತ್ತರಿಸಬೇಕಾದ ದಿನಾಂಕ** | 22.12.2021 |
| **ಉತ್ತರಿಸುವ ಸಚಿವರು** | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ, ಭೂಮಾಪಕರ ನೇಮಕಾತಿಯ ಕೊರತೆಯಿಂದಾಗಿ, ಜಿಲ್ಲೆಯಲ್ಲಿ ಭೂಮಾಪನ ಕೆಲಸದಲ್ಲಿ ವಿಪರೀತ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೊಡಗು ಜಿಲ್ಲೆಯಲ್ಲಿ ಪ್ರಸ್ತುತ 22 ಸರ್ಕಾರಿ ಭೂಮಾಪಕರು ಹಾಗೂ 34 ಜನ ಪರವಾನಗಿ ಭೂಮಾಪಕರು ಕಾರ್ಯ ನಿರ್ವಹಿಸುತ್ತಿದ್ದು, ಭೂಮಾಪಕರ ಕೊರತೆಯ ಕಾರಣದಿಂದ ಜಿಲ್ಲೆಯಲ್ಲಿ ಭೂಮಾಪನ ಕೆಲಸದಲ್ಲಿ ವಿಳಂಬವಾಗುತ್ತಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ಭೂಮಾಪನ ಇಲಾಖೆಯಲ್ಲಿ ನೊಂದಣಿಯಾಗಿರುವ ಖಾಸಗಿ ಭೂಮಾಪಕರನ್ನು ಹೆಚ್ಚಿನ ಸಂಖ್ಯೆಯಲ್ಲಿ ಭೂಮಾಪನ ಕೆಲಸದಲ್ಲಿ ತೊಡಗಿಸಲು ಸರ್ಕಾರ ಇದುವರೆಗೆ ಕ್ರಮ ವಹಿಸಿಲ್ಲದಿರುವುದಕ್ಕೆ ಕಾರಣಗಳೇನು; | 2072 ಪರವಾನಗಿ ಭೂಮಾಪಕರ ಆಯ್ಕೆ ಮಾಡುವ ಕುರಿತು ಅರ್ಜಿಗಳನ್ನು ಆಹ್ವಾನಿಸಿ, ದಿನಾಂಕ: 1-2-2021 & 2-2-2021 ರಂದು ಪರೀಕ್ಷೆಯನ್ನು ನಡೆಸಲಾಗಿರುತ್ತದೆ. ಜಿಲ್ಲಾವಾರು ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ತರಬೇತಿ ನಂತರ ಉತ್ತೀರ್ಣವಾದ 841 ಜನರಿಗೆ ಪರವಾನಗಿ ನೀಡಿ ದಿನಾಂಕ 03-09-2021 ರಂದು Counselling ಮೂಲಕ ವಿವಿಧ ತಾಲ್ಲೂಕುಗಳಿಗೆ ನಿಯೋಜಿಸಲಾಗಿರುತ್ತದೆ. ಸದರಿ ಪರವಾನಗಿ ಭೂಮಾಪಕರು ರಾಜ್ಯದ ವಿವಿಧ ನಿಯೋಜಿತ ತಾಲ್ಲೂಕುಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ<br>ಅದೇ ರೀತಿ ಇಲಾಖಾ ತರಬೇತಿ ಪೂರ್ಣಗೊಳಿಸಿರುವ 438 ಜನ ಪರವಾನಗಿ ಭೂಮಾಪಕರಿಗೆ Counselling ಮೂಲಕ ವಿವಿಧ ತಾಲ್ಲೂಕುಗಳಿಗೆ ಸ್ಥಳ ನಿಯೋಜನೆ ಮಾಡಲಾಗಿದೆ. ಪ್ರಸ್ತುತ 508 ಜನರು ತರಬೇತಿ ಪಡೆಯುತ್ತಿದ್ದು, ತರಬೇತಿ ನಂತರ ಉತ್ತೀರ್ಣರಾದವರಿಗೆ ಪರವಾನಗಿ ನೀಡಿ ರಾಜ್ಯದ ವಿವಿಧ ತಾಲ್ಲೂಕುಗಳಿಗೆ ನಿಯೋಜಿಸಲಾಗುತ್ತಿದೆ. |
| ಇ) | ಜಿಲ್ಲೆಯಲ್ಲಿ ಸದರಿ ಸಮಸ್ಯೆಯನ್ನು ಪರಿಹರಿಸುವ ಸಲುವಾಗಿ, ಭೂಮಾಪನ ಇಲಾಖೆಯಲ್ಲಿ ನೋಂದಣಿಯಾಗಿರುವ ಖಾಸಗಿ ಭೂಮಾಪಕರನ್ನು ಹೆಚ್ಚಿನ ಸಂಖ್ಯೆಯಲ್ಲಿ ಭೂಮಾಪನ ಕೆಲಸದಲ್ಲಿ ತೊಡಗಿಸಲು ಸರ್ಕಾರ ಈ ಕೂಡಲೇ ಕ್ರಮ ವಹಿಸುವುದೇ? | |

ಸಂಖ್ಯೆ: ಕಂಇ 230 ಎಸ್‌ಎಸ್‌ಸಿ 2021

(ಆರ್.ಅಶೋಕ)

ಕಂದಾಯ ಸಚಿವರು